ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 123-128
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಮಹಾತ್ಮ ಗಾಂಧಿ ಉದ್ಯೋಗ ಖಾತರಿ ಯೋಜನೆಯು ಕೈಗೊಳ್ಳಬಹುದಾದ ವೈಯಕ್ತಿಕ ಮತ್ತು ಸಮುದಾಯ ಕಾಮಗಾರಿಗಳು

**ಕಿರಣ ಡಿ[1] ಮತ್ತು ಡಾ. ಎಸ್.ಟಿ ರಾಮಚಂದ್ರ[2]**

[1]ಸಂಶೋಧನಾ ವಿದ್ಯಾರ್ಥಿ, ಗಾಂಧಿ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.
[2]ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾಲಯ, ಮೈಸೂರು

***Abstract:***
*ಸ್ವಾತಂತ್ರ ಭಾರತದಲ್ಲಿ ಗ್ರಾಮ ಗಣರಾಜ್ಯ ಅಸ್ತಿತ್ವಕ್ಕೆ ಬರದೆ ಸ್ವರಾಜಕ್ಕೆ ಅರ್ಥವಿರುವುದಿಲ್ಲವೆಂದು ಮಹಾತ್ಮ ಗಾಂಧೀಜಿಯವರು ನಂಬಿದ್ದರು. ಗಾಂಧೀಜಿಯವರ ಗ್ರಾಮರಾಜ್ಯ ಸ್ಥಾಪನೆಯ ಕನಸನ್ನು ನನಸಾಗಿಸಬೇಕೆಂಬ ಪ್ರಯತ್ನದಲ್ಲಿ ಕರ್ನಾಟಕ ರಾಜ್ಯವು ಮುಂಚೂಣಿಯಲ್ಲಿದೆ. ನಮ್ಮ ಸಂವಿಧಾನದ ರಾಜ್ಯನೀತಿಗೆ ಸಂಬಂಧಿಸಿದ ನಿರ್ದೇಶಿತ ತತ್ವಗಳಲ್ಲಿ ತಿಳಿಸಿರುವಂತೆ ರಾಜ್ಯದಲ್ಲಿ ಪಂಚಾಯಿತಿಗಳನ್ನು ಸ್ಥಾಪಿಸಿ ಸ್ಥಳೀಯ ಮಟ್ಟದಲ್ಲಿ ಅಭಿವೃದ್ಧಿಗೆ ಒತ್ತು ನೀಡಲಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ ಮತ್ತು ಜನರ ಜೀವನವನ್ನು ಉತ್ತಮಗೊಳಿಸುವ ಸಲುವಾಗಿ ಗ್ರಾಮ ಪಂಚಾಯಿತಿಗಳ ಮೂಲಕ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಅಂತಹ ಕಾರ್ಯಕ್ರಮಗಳಲ್ಲಿ ಮಹಾತ್ಮ ಗಾಂಧಿ ಉದ್ಯೋಗ ಖಾತರಿ ಯೋಜನೆಯು ಕೂಡ ಒಂದಾಗಿದೆ. ಈ ಯೋಜನೆಯಡಿಯಲ್ಲಿ 18 ವರ್ಷ ತುಂಬಿದವರಿಗೆ ವರ್ಷದಲ್ಲಿ 100 ದಿನ ಉದ್ಯೋಗ ಕಲ್ಪಿಸುವ ಉದ್ದೇಶವನ್ನು ಹೊಂದಿದೆ. ಪ್ರಸ್ತುತ ಲೇಖನದಲ್ಲಿ ಈ ಯೋಜನೆಯಡಿಯಲ್ಲಿ ಕೈಗೊಳ್ಳಬಹುದಾದ ವೈಯಕ್ತಿಕ ಮತ್ತು ಸಮುದಾಯ ಕಾಮಗಾರಿಗಳ ಕುರಿತು ಅಧ್ಯಯನ ಮಾಡಲಾಗಿದೆ.*

***Keywords:*** *ಪಂಚಾಯತ್ ರಾಜ್, ಮಹಾತ್ಮ ಗಾಂಧಿ ಉದ್ಯೋಗ ಖಾತರಿ ಯೋಜನೆ, ನರೇಗಾ, ಗ್ರಾಮ ಸ್ವರಾಜ್ಯ, ಗ್ರಾಮ ಅಭಿವೃದ್ಧಿ.*

## ಪೀಠಿಕೆ

ಭಾರತದ ಸ್ವಾತಂತ್ರ್ಯಕ್ಕಾಗಿ ಅಪ್ರತಿಮವಾಗಿ ಹೋರಾಟ ನಡೆಸಿದ ಗಾಂಧೀಜಿಯವರು ಪೂರ್ಣ ಸ್ವರಾಜ್ಯದ ಸ್ಥಾಪನೆಯ ಕನಸು ಕಂಡಿದ್ದರು. ಗಾಂಧೀಜಿಯವರ ದೃಷ್ಟಿಯಲ್ಲಿ ಸ್ವರಾಜ್ಯವೆಂದರೆ ಪರಿಪೂರ್ಣವಾದ ಪ್ರಜಾರಾಜ್ಯ. ಈ ವ್ಯವಸ್ಥೆಯಲ್ಲಿ ಸಾರ್ವಭೌಮಾಧಿಕಾರವಿರುವುದು ಪ್ರಜೆಗಳಲ್ಲೇ ಹೊರತು ಪ್ರಭುತ್ವದಲ್ಲಿ ಅಲ್ಲ. *'ಕೆಲವೇ ಜನರ ಕೈಯಲ್ಲಿ ಅಧಿಕಾರದ ಕೇಂದ್ರೀಕರಣ ನನ್ನ ಕಲ್ಪನೆಯ ಸ್ವರಾಜ್ಯವಲ್ಲ. ಅಧಿಕಾರದ ದುರ್ಬಳಕೆಯಾಗದಂತೆ ಅದನ್ನು ನಿಯಂತ್ರಿಸುವ ಶಕ್ತಿಯನ್ನು ಬಹಳ ಜನರ ಕೈಗೆ ಕೊಡುವುದೇ ನನ್ನ ಸ್ವರಾಜ್ಯದ ಕಲ್ಪನೆ'* ಎನ್ನುವುದು ಗಾಂಧೀಜಿಯವರ ಪರಿಕಲ್ಪನೆಯಾಗಿತ್ತು. ಸ್ವರಾಜ್ಯವನ್ನು ಪಡೆದ ನಂತರ ಸುರಾಜ್ಯ ಪ್ರಾರಂಭವಾಗುತ್ತದೆ ಎಂದು ಅವರು ಹೇಳಿದ್ದರು. ಪಂಚಾಯತ್ ರಾಜ್ ಸಂಸ್ಥೆಗಳ ಪ್ರಮುಖ ಸ್ವರೂಪ ಅಥವಾ ಉದ್ದೇಶವೆಂದರೆ ರಾಜ್ಯದ

***Please cite this article as:*** ಕಿರಣ ಡಿ ಮತ್ತು ಎಸ್.ಟಿ ರಾಮಚಂದ್ರ. (2024). ಮಹಾತ್ಮ ಗಾಂಧಿ ಉದ್ಯೋಗ ಖಾತರಿ ಯೋಜನೆಯು ಕೈಗೊಳ್ಳಬಹುದಾದ ವೈಯಕ್ತಿಕ ಮತ್ತು ಸಮುದಾಯ ಕಾಮಗಾರಿಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(1), 123–128.

ಆಡಳಿತಾಧಿಕಾರವನ್ನು ಪ್ರಗತಿಪರವಾಗಿ ವಿಸ್ತರಣೆ ಮಾಡುವುದಾಗಿದೆ. ಈ ವ್ಯವಸ್ಥೆಯು ಜನಸಾಮಾನ್ಯರ ಮತ್ತು ಗಣ್ಯ ಅಧಿಕಾರಿ ವರ್ಗಗಳ ನಡುವಣ ಅಂತರವನ್ನು ಕಡಿಮೆ ಮಾಡಲು ಸಂಪರ್ಕ ಸೇತುವೆಯನ್ನು ನಿರ್ಮಿಸಿದೆ. ಆಧುನಿಕ ಹಾಗೂ ಸಾಮಾಜಿಕ ಬದಲಾವಣೆಯ ಪರವಾಗಿರುವ ಹೊಸ ನಾಯಕತ್ವವನ್ನು ಹುಟ್ಟುಹಾಕಿದೆ. ಗ್ರಾಮೀಣ ಜನತೆಯು ಸರ್ವತೋಮುಖ ಅಭಿವೃದ್ಧಿಯ ಮನೋಭಾವನೆಯನ್ನು ಬೆಳೆಸಿಕೊಳ್ಳುವಲ್ಲಿ ಸಹಾಯ ಮಾಡಿದೆ.

ಉದ್ಯೋಗ ಖಾತ್ರಿ ಯೋಜನೆಯಲ್ಲಿ ವೈಯಕ್ತಿಕ ಕಾಮಗಾರಿಗಳು ಮತ್ತು ಸಮುದಾಯ ಕಾಮಗಾರಿಗಳು ಎನ್ನುವ ಎರಡು ಬಗೆಯ ಕೆಲಸಗಳನ್ನು ಮಾಡಬಹುದಾಗಿದೆ.

**ವೈಯಕ್ತಿಕ ಕಾಮಗಾರಿಗಳು**

ದನದ ಕೊಟ್ಟಿಗೆ, ಕುರಿ ಶೆಡ್, ಹಂದಿ ಶೆಡ್, ಅಣಬೆ ಶೆಡ್, ಈರುಳ್ಳಿ ಶೇಖರಣೆ ಘಟಕ, ಕೋಳಿ ಶೆಡ್, ಪೌಷ್ಟಿಕ ತೋಟ, ಕೃಷಿ ಹೊಂಡ, ಬದು ನಿರ್ಮಾಣ, ಸೋಕ್ ಪಿಟ್, ಹಿಪ್ಪು ನೇರಳೆ, ತೆಂಗು, ಮಾವು, ಅಡಿಕೆ, ಹುಣಸೆ, ಬಾಳೆ, ಹಲಸು, ವಿಳ್ಳೆದೆಲೆ. ತೇಗು, ಹೊನ್ನೆ, ಸಿಲ್ವರ್ ಮತ್ತು ಮಹಾಗನಿ ಮುಂತಾದ ಅರಣ್ಯ ಕೃಷಿ ಸಂಬಂಧಿಸಿದ ಕಾಮಗಾರಿಗಳನ್ನು ಕೈಗೊಳ್ಳಬಹುದು.

***ದನದ ಕೊಟ್ಟಿಗೆ:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ದನದ ಶೆಡ್ ನಿರ್ಮಾಣಕ್ಕೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ 43,000 ಅನುದಾನವನ್ನು ನೀಡಲಾಗುತ್ತದೆ. ಇತರೆ ವರ್ಗದವರಿಗೆ ದನದ ಕೊಟ್ಟಿಗೆ ನಿರ್ಮಾಣ ಮಾಡಲು 19,625 ರೂಗಳ ಅನುದಾನವನ್ನು ನೀಡುವುದರ ಮೂಲಕ ಜಾನುವಾರುಗಳ ಸುಸರ್ಜಿತ ಕೊಟ್ಟಿಗೆ ನಿರ್ಮಾಣಕ್ಕೆ ಪ್ರೋತ್ಸಾಹವನ್ನು ನೀಡುತ್ತದೆ.

***ಕುರಿ ಶೆಡ್:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕುರಿ ಸಾಕಾಣಿಕೆಯನ್ನು ಅಭಿವೃದ್ಧಿ ಪಡಿಸಲು 68,000 ರೂಗಳಷ್ಟು ಅನುದಾನವನ್ನು ನೀಡಲಾಗುತ್ತದೆ. ಕುರಿಗಳು ಕಾಡು ಪ್ರಾಣಿಗಳ ಹಾವಳಿಗೆ ಮತ್ತು ಪ್ರಕೃತಿ ವಿಕೋಪಗಳಿಂದ ರಕ್ಷಿಸಲು ಕುರಿಶೆಡ್ ನಿರ್ಮಾಣಕ್ಕೆ ಆದ್ಯತೆಯನ್ನು ನೀಡಲಾಗುತ್ತಿದೆ.

***ಹಂದಿ ಶೆಡ್:*** ಉದ್ಯೋಗ ಖಾತ್ರಿ ಯೋಜನೆಯಡಿ ಹಂದಿ ಶೆಡ್ ನಿರ್ಮಾಣ ಮಾಡಿಕೊಳ್ಳಲು ವೈಯಕ್ತಿಕ ಕಾಮಗಾರಿ ಅಡಿಯಲ್ಲಿ ಅಂದಾಜು ಮೊತ್ತ 61,000 ರೂಗಳನ್ನು ನೀಡಲಾಗುತ್ತದೆ. ಇದರಿಂದ ಹಂದಿಗಳನ್ನು ಸಾಕಾಣಿಕೆ ಮಾಡಲು ಮತ್ತು ಹಂದಿಗಳಿಂದ ಹರಡಬಹುದಾದ ಕೆಲವು ರೋಗರುಜಿನಗಳಿಂದ ಕಾಪಾಡಲು ಸಾಧ್ಯವಾಗಿದೆ ಮತ್ತು ಹಂದಿ ಸಾಕಾಣಿಕೆದಾರರ ಆರ್ಥಿಕ ಪ್ರಗತಿಗೆ ನರೇಗಾ ಯೋಜನೆಯು ಪೂರಕವಾಗಿದೆ.

***ಅಣಬೆ ಶೆಡ್:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಮಹಿಳಾ ಸ್ವಸಹಾಯ ಸಂಘದ ಸದಸ್ಯರುಗಳ ಅಭಿವೃದ್ಧಿ ಪಡಿಸುವ ಉದ್ದೇಶದಿಂದ ಅಣಬೆ ಶೆಡ್‌ಗಳನ್ನು ನಿರ್ಮಾಣ ಮಾಡುವುದಕ್ಕಾಗಿ ಅಂದಾಜು ಮೊತ್ತ 95,000 ರೂಗಳು ಅನುದಾನವನ್ನು ನೀಡುವುದರ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿರುವ ಸ್ವಸಹಾಯ ಸಂಘಗಳ ಅಭಿವೃದ್ಧಿಗೆ ಕಾರಣವಾಗಿದೆ ಸಂಘದ ಸದಸ್ಯರುಗಳಿಗೆ ವೈಯಕ್ತಿಕವಾಗಿ ಅಭಿವೃದ್ಧಿ ಹೊಂದಲು ಸಹಾಯಕವಾಗಿದೆ.

***ಈರುಳ್ಳಿ ಶೇಖರಣೆ ಘಟಕ:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ವೈಯಕ್ತಿಕ ಕಾಮಗಾರಿಗಳಲ್ಲಿ ಈರುಳ್ಳಿ ಶೆಡ್ ನಿರ್ಮಾಣ ಮಾಡಲು ಅಂದಾಜು ಮೊತ್ತ 98,000 ರೂಗಳಿಂದ 1,73,000 ರೂಗಳವರೆಗೆ ಅನುದಾನವನ್ನು ನೀಡಲಾಗುತ್ತದೆ. ಇದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಈರುಳ್ಳಿಯನ್ನು ಸಂರಕ್ಷಿಸಿ ಉತ್ತಮ ಬೆಲೆ ಬಂದಾಗ ಮಾರುಕಟ್ಟೆಗಳಲ್ಲಿ ಮಾರುವುದಕ್ಕೆ ಅನುಕೂಲಕರವಾಗಿದೆ.

***ಕೋಳಿ ಶೆಡ್:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೋಳಿ ಶೆಡ್ ನಿರ್ಮಾಣ ಮಾಡಲು ಅಂದಾಜು ಮೊತ್ತ 45,000 ರೂಗಳವರೆಗೆ ಅನುದಾನವನ್ನು ನೀಡುವುದರ ಮೂಲಕ ಗ್ರಾಮೀಣ ಪ್ರದೇಶದ ಜನರ ಆರ್ಥಿಕ ಬಲವರ್ಧನೆಗೆ ಪ್ರೇರಣೆಯಾಗಿದೆ.

***ಪೌಷ್ಟಿಕ ತೋಟ:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಗ್ರಾಮೀಣ ಜನರು ತಮ್ಮ ಮನೆಯ ಹಿತ್ತಲಿನಲ್ಲಿಯೇ ಸಸಿಗಳನ್ನು ನೇಡಲು ಅನುದಾನವನ್ನು ನೀಡುತ್ತಾರೆ. ಅಂದಾಜು ಮೊತ್ತ 2,400 ರೂಗಳವರೆಗೆ ಈ ಕಾಮಗಾರಿಗಾಗಿ ಹಣವನ್ನು ನೀಡುತ್ತಾರೆ. ಇಲ್ಲಿ ಔಷಧಿ ಗಿಡಗಳ, ಮನೆ ಬಳಕೆ ಸಸಿಗಳನ್ನು ನೇಡಲು ಪ್ರೋತ್ಸಾಹಿಸುತ್ತಾರೆ

***ಕೃಷಿ ಹೊಂಡ:*** ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಕೃಷಿ ಹೊಂಡಗಳನ್ನು ನಿರ್ಮಿಸಿಕೊಳ್ಳಲು ನರೇಗಾ ಯೋಜನೆಯಲ್ಲಿ ಅಂದಾಜು ಮೊತ್ತ 80,000ರೂಗಳಷ್ಟು ಅನುದಾನವನ್ನು ನೀಡುತ್ತಾರೆ. ಕೃಷಿ ಹೊಂಡದಲ್ಲಿ ಮಳೆಯ ನೀರನ್ನು ಸಂಗ್ರಹಿಸಿಕೊಂಡು ಕೃಷಿಗೆ ನೀರನ್ನು ಪೂರೈಸುವ ಯೋಜನೆಯಾಗಿದೆ ವೈಯಕ್ತಿಕ ಕಾಮಗಾರಿಗಳಲ್ಲಿ ಕೃಷಿಹೊಂಡ ನಿರ್ಮಾಣವು ಬಹಳ ಮುಖ್ಯವಾದ ಕಾಮಗಾರಿಗಳಲ್ಲಿ ಒಂದಾಗಿದೆ.

***ಬದು ನಿರ್ಮಾಣ:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೃಷಿ ಚಟುವಟಿಕೆಗಳನ್ನು ಕ್ರಿಯಾಶೀಲಗೊಳಿಸಲು ಕೃಷಿಗೆ ಪೂರಕವಾಗಿ ಬದು ನಿರ್ಮಾಣ ಮಾಡಲು ಅಂದಾಜು ಮೊತ್ತ 10,000 ರೂಗಳು ಪ್ರತಿ ಎಕರೆಗೆ ನೀಡಲಾಗುತ್ತದೆ. ಇದರಿಂದ ಕೃಷಿಯಲ್ಲಿ ಪ್ರಗತಿಯನ್ನು ಸಾಧಿಸುವುದರ ಜೊತೆಗೆ ಉದ್ಯೋಗ ಸೃಷ್ಟಿಯು ಸಾಧ್ಯವಾಗುತ್ತದೆ. ಬದುವಿನ ನಿರ್ಮಾಣದಿಂದ ವ್ಯವಸಾಯಕ್ಕೆ ನೀರು ಪೂರೈಸಲು ಸಾಧ್ಯವಾಗುತ್ತದೆ.

**ಸೋಕ್ ಪಿಟ್ :** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಸ್ವಚ್ಛತೆಯ ದೃಷ್ಟಿಯಿಂದ ಮನೆಯ ಹಿಂದೆ ಸೋಕ್‌ಪಿಟ್ (ಬಚ್ಚಲು ಗುಂಡಿ)ಗಳನ್ನು ನಿರ್ಮಿಸುವುದು. ಈ ವೈಯಕ್ತಿಕ ಕಾಮಗಾರಿಗೆ ನೀಡುವಂತಹ ಅಂದಾಜು ಮೊತ್ತ 14,000 ರೂಗಳಾಗಿರುತ್ತದೆ.

***ಹಿಪ್ಪು ನೇರಳೆ:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೈಗೊಳ್ಳುವಂತಹ ಪ್ರಮುಖ ವೈಯಕ್ತಿಕ ಕಾಮಗಾರಿಗಳಲ್ಲಿ ಹಿಪ್ಪು ನೇರಳೆಯನ್ನು ಕೃಷಿ ಭೂಮಿಗಳಲ್ಲಿ ಬೆಳೆಸುವುದರ ಮೂಲಕ ರೈತರ ಆದಾಯವನ್ನು ವೃದ್ಧಿಸುವುದಾಗಿದೆ. ಹಿಪ್ಪು ನೇರಳೆ ಬೆಳೆಯುವ ವಿಧಾನಕ್ಕೆ ತಕ್ಕಂತೆ ಅನುದಾನವನ್ನು ನೀಡುತ್ತಾರೆ. ಹಿಪ್ಪು ನೇರಳೆ ನರ್ಸರಿ ನಿರ್ಮಿಸಿಕೊಳ್ಳಲು ನೀಡುವ ಅಂದಾಜು ಮೊತ್ತ 1,70,753 ರೂಗಳಾಗಿರುತ್ತದೆ. ಹಿಪ್ಪು ನೇರಳೆ ನಾಟಿ ಜೋಡಿ ಸಾಲು ಪದ್ಧತಿಗೆ ನೀಡುವ ಅಂದಾಜು ಮೊತ್ತ 77,188 ರೂಗಳು ಹಾಗೆಯೇ ಹಿಪ್ಪು ನೇರಳೆ ಮರಗಡ್ಡಿ ವಿಧಾನಕ್ಕೆ ನೀಡುವ ಅಂದಾಜು ಮೊತ್ತ 66,064 ರೂಗಳು ಹೀಗೆ ಹಿಪ್ಪು ನೇರಳೆ ಕೃಷಿ ಅಭಿವೃದ್ಧಿಗೆ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಅನುದಾನವನ್ನು ನೀಡಲಾಗುತ್ತದೆ.

***ತೆಂಗು:*** ತೆಂಗು ಬೆಳೆಯಲು ನರೇಗಾ ಯೋಜನೆಯಡಿಯಲ್ಲಿ ಪ್ರತಿ ಹೆಕ್ಟೇರ್‌ಗೆ ನೀಡುವ ಅಂದಾಜು ಮೊತ್ತ 80,450 ರೂಗಳು ಹಾಗೆಯೇ ಒಂದು ಎಕರೆ ಭೂಮಿಯಲ್ಲಿ ತೆಂಗು ಹಾಕುವುದಕ್ಕೆ 26,592 ರೂಗಳನ್ನು ನೀಡಲಾಗುತ್ತದೆ.

***ಮಾವು:*** ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೃಷಿ ಭೂಮಿಯಲ್ಲಿ ಮಾವು ಬೆಳೆಯಲು ನೀಡುವ ಅಂದಾಜು ಮೊತ್ತ ಪ್ರತಿ ಹೆಕ್ಟೇರ್‌ಗೆ 60,541ರೂಗಳು ನೀಡಲಾಗುತ್ತದೆ.

***ಅಡಿಕೆ:*** ಕೃಷಿ ಭೂಮಿಗಳಲ್ಲಿ ಅಡಿಕೆ ಬೆಳೆಯಲು ನರೇಗಾ ಯೋಜನೆಯಡಿಯಲ್ಲಿ ನೀಡುವ ಅಂದಾಜು ಮೊತ್ತ ಪ್ರತಿ ಹೆಕ್ಟೇರ್‌ಗೆ 2,50,000 ರೂಗಳು ನೀಡಲಾಗುತ್ತದೆ. ಉದ್ಯೋಗ ಖಾತ್ರಿ ಯೋಜನೆಯಲ್ಲಿ ವೈಯಕ್ತಿಕ ಕಾಮಗಾರಿಗಳಲ್ಲಿ ಈ ಮೇಲೆ ಸೂಚಿಸುವ ಕಾಮಗಾರಿಗಳಲ್ಲದೇ ದಾಳಿಂಬೆ, ನುಗ್ಗೆ, ಕರಿಬೇವು

ನೇರಳೆ, ನಿಂಬೆ, ಹುಣಸೆ, ಬಾಳೆ, ವಿಳ್ಯೇದೆಲೆಗಳನ್ನು ಬೆಳೆಯಲು ಅನುದಾನವನ್ನು ನೀಡುತ್ತಾರೆ. ಎರೆಹುಳು ಗೊಬ್ಬರ ಘಟಕ, ಅಜೋಲ್ಲಾ ತೊಟ್ಟಿ ನಿರ್ಮಾಣ ತೆರೆದ ಬಾವಿ ನಿರ್ಮಾಣ, ವಸತಿ ನಿರ್ಮಾಣಗಳು ಒಳಗೊಂಡಂತೆ ಬಹುತೇಕ ಕಾಮಗಾರಿಗಳು ವೈಯಕ್ತಿಕವಾಗಿ ಬೆಳವಣಿಗೆ ಹೊಂದಲು ಸಹಾಯಕವಾಗಿದೆ.

**ವೈಯಕ್ತಿಕ ಕಾಮಗಾರಿ ಕೈಗೊಳ್ಳಲು ಆದ್ಯತೆಯ ಮೇರೆಗೆ ನಿಗದಿಪಡಿಸಿದ ಮಾನದಂಡಗಳು**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲೆಮಾರಿ ಪರಿಶಿಷ್ಟ ಪಂಗಡಗಳು, ಪ್ರಕಟಣೆಯಿಂದ ತೆಗೆದುಹಾಕಿದ ಬುಡಕಟ್ಟು ಸಮುದಾಯದವರು, ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಇತರೆ ಕುಟುಂಬಗಳು, ಭೂ ಸುಧಾರಣಾ ಫಲಾನುಭವಿಗಳು, ವಿಕಲಚೇತನ ಪ್ರಧಾನ ಕುಟುಂಬಗಳು, ಸ್ತ್ರೀ ಪ್ರಧಾನ ಕುಟುಂಬಗಳು, ಇಂದಿರಾ ಆವಾಸ್ ಯೋಜನೆಯ ಫಲಾನುಭವಿಗಳು, ಸಣ್ಣ ಮತ್ತು ಅತಿ ಸಣ್ಣ ರೈತರ ಜಮೀನುಗಳಲ್ಲಿ ಆಧ್ಯತೆಯನುಸಾರ ಹಾಗೂ ಷರತ್ತುಗಳಿಗೊಳಪಟ್ಟು ಕಾಮಗಾರಿಗಳನ್ನು ಕೈಗೊಳ್ಳಬಹುದು ಹಾಗೂ ಅನುಸೂಚಿತ ಬುಡಕಟ್ಟುಗಳ ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳ ಅರಣ್ಯ ಹಕ್ಕುಗಳನ್ನು ಮಾನ್ಯಮಾಡುವ ಅಧಿನಿಯಮ 2006 ವ್ಯಾಪ್ತಿಗೆ ಒಳಪಡುವವರು.

**ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿ ಕೈಗೊಳ್ಳಬಹುದಾದ ಸಮುದಾಯ ಆಧಾರಿತ ಕಾಮಗಾರಿಗಳು**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೈಗೊಳ್ಳುವಂತಹ ಪ್ರಮುಖವಾದ ಸಮುದಾಯ ಆಧಾರಿತ ಕಾಮಗಾರಿಗಳು ಕೈಗೊಳ್ಳಬಹುದಾಗಿದೆ. ಅವುಗಳೆಂದರೆ ಶಾಲಾ ಕಾಂಪೌಂಡ್ ನಿರ್ಮಾಣ, ಶಾಲಾ ಶೌಚಾಲಯ, ಶಾಲಾ ಆಟದ ಮೈದಾನ, ಮಳೆ ನೀರು ಕೊಯ್ಲು, ಅಡುಗೆ ಮನೆ ಅಥವಾ ಭೋಜನಾಲಯ, ಗ್ರಾಮೀಣ ಗೋದಾಮು, ಸಂಜೀವಿನಿ ಶೆಡ್, ರಾಜೀವ್ ಗಾಂಧಿ ಸೇವಾ ಕೇಂದ್ರ, ಸಂತೆ ಕಟ್ಟಡ, ಕಾಂಕ್ರೀಟ್ ರಸ್ತೆಗಳು, ಮೆಟ್ಲಿಂಗ್ ರಸ್ತೆಗಳು ಚರಂಡಿ ನಿರ್ಮಾಣ, ಕೊಳವೆ ಬಾವಿಯ ಮರು ಪೂರ್ಣ ಘಟಕ ಇನ್ನೂ ಮುಂತಾದವುಗಳು

**ಶಾಲಾ ಕಾಂಪೌಂಡ್ ನಿರ್ಮಾಣ**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಸಮುದಾಯದ ಅಭಿವೃದ್ಧಿಗಾಗಿ ಕಾಮಗಾರಿಗಳನ್ನು ಮಾಡುತ್ತಾರೆ. ಇಲ್ಲಿ ಉದ್ಯೋಗ ಚೀಟಿ ಹೊಂದಿದ ಫಲಾನುಭವಿಗಳು ಒಟ್ಟಾಗಿ ಕೆಲಸ ಮಾಡುತ್ತಾರೆ ಶಾಲಾ ಕಾಂಪೌಂಡ್ ನಿರ್ಮಾಣಕ್ಕೆ ನೀಡುವ ಅಂದಾಜು ಮೊತ್ತ 52,000 ರೂಗಳ (ಬ್ರಿಕ್ ವಾಲ್ 100ಮೀ) ನೀಡುತ್ತಾರೆ.

**ಶಾಲಾ ಶೌಚಾಲಯ**

ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಶಾಲಾ ಶೌಚಾಲಯ ನಿರ್ಮಾಣ ಮಾಡಲು ಸಮುದಾಯ ಕಾಮಗಾರಿಗಳ ಮೂಲಕ ಮಾಡಲಾಗುತ್ತದೆ. ಶಾಲಾ ಶೌಚಾಲಯ ಮಾದರಿ–1 (100ಕ್ಕಿಂತ ಹೆಚ್ಚು ಮಕ್ಕಳು) ನಿರ್ಮಾಣ ಮಾಡಲು ನೀಡುವ ಅಂದಾಜು ಮೊತ್ತ 3,00,000ರೂಗಳು, ಶಾಲಾ ಶೌಚಾಲಯದ ಮಾದರಿ–2 (150 ಕ್ಕಿಂತ ಹೆಚ್ಚಿನ ಮಕ್ಕಳು) ನಿರ್ಮಾಣ ಮಾಡಲು ನೀಡುವ ಅಂದಾಜು ಮೊತ್ತ 4,30,000 ರೂಗಳು, ಶಾಲಾ ಶೌಚಾಲಯ ಮಾದರಿ–3 (240ಕ್ಕಿಂತ ಹೆಚ್ಚು ಮಕ್ಕಳು) ನಿರ್ಮಾಣಕ್ಕೆ ನೀಡುವ ಅಂದಾಜು ಮೊತ್ತ 9,00,000 ರೂಗಳು ನೀಡುವುದರ ಮೂಲಕ ಶಾಲಾ ನೈರ್ಮಲ್ಯವನ್ನು ಕಾಪಾಡುವುದು ನರೇಗಾ ಯೋಜನೆಯು ಮುಖ್ಯ ಭಾಗವಾಗಿದೆ.

**ಶಾಲಾ ಆಟದ ಮೈದಾನ**

ನರೇಗಾ ಯೋಜನೆಯಡಿಯಲ್ಲಿ ಶಾಲಾ ಆಟದ ಮೈದಾನವನ್ನು ಸಮುದಾಯ ಕಾಮಗಾರಿಗಳಲ್ಲಿ ಮಾಡಲಾಗುತ್ತದೆ. 40 ಮೀಟರ್ ಉದ್ದ, 40 ಮೀಟರ್ ಅಗಲವಾಗಿರುವ ವಿಸ್ತೀರ್ಣದಲ್ಲಿ ಶಾಲಾ ಆಟದ ಮೈದಾನವನ್ನು ಹೊಂದಿರುತ್ತದೆ. ಇಲ್ಲಿ ಖೋಖೋ/ಕಬ್ಬಡಿ ವಾಲಿಬಾಲ್ ಅಂಕಣಗಳು ಮುಂತಾದ ಕ್ರೀಡೆಗಳನ್ನು ಆಡಬಹುದಾಗಿದೆ. ನರೇಗಾ

ಯೋಜನೆಯಲ್ಲಿ ಈ ಕಾಮಗಾರಿಗೆ ನೀಡುವ ಅಂದಾಜು ಮೊತ್ತ 2,50,000 ರೂಗಳನ್ನು ನೀಡುತ್ತಾರೆ.

**ಮಳೆ ನೀರಿನ ಕೊಯ್ಲು**

ಪರಿಸರ ಸ್ನೇಹಿ ಕಾರ್ಯಕ್ರಮಗಳಲ್ಲಿಯೂ ನರೇಗಾ ಯೋಜನೆಯೂ ವಿಶೇಷವಾದ ಆಸಕ್ತಿಯನ್ನು ತೋರಿದೆ. ಮಳೆಗಾಲದಲ್ಲಿ ಬೀಳುವ ನೀರನ್ನು ಸಂರಕ್ಷಿಸಿ ಗೃಹ ಉಪಯೋಗಿ ಕೆಲಸಗಳಿಗೆ ಬಳಸುವ ಪದ್ಧತಿಯಾಗಿದೆ. ಈ ಯೋಜನೆಗೆ ನೀಡುವ ಅಂದಾಜು ಮೊತ್ತ 1,40,000 ರೂಗಳು.

**ಗ್ರಾಮೀಣ ಗೋದಾಮು**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಗೋ ಸಂರಕ್ಷಣೆಯ ದೃಷ್ಟಿಯಿಂದ ಗೋದಾಮುಗಳನ್ನು ನಿರ್ಮಿಸಲು ಗೋದಾಮು ಮಾದರಿ–1 (250 ಮೆಟ್ರಿಕ್ ಟನ್ ಸಾಮರ್ಥ್ಯ) ನಿರ್ಮಾಣ ಮಾಡಲು ನೀಡುವ ಅಂದಾಜು ಮೊತ್ತ 12,30,000 ರೂಗಳನ್ನು ನೀಡಲಾಗುತ್ತದೆ. ಗ್ರಾಮೀಣ ಗೋದಾಮು ಮಾದರಿ–2 (500 ಮೆಟ್ರಿಕ್ ಟನ್ ಸಾಮರ್ಥ್ಯ) ನಿರ್ಮಾಣಕ್ಕೆ ನೀಡುವ ಅಂದಾಜು ಮೊತ್ತ 19,50,000 ರೂಗಳು. ಈ ಕಾಮಗಾರಿಗಳನ್ನು ಸಮುದಾಯದ ಜನರುಗಳಿಂದ ಮಾಡಲಾಗುತ್ತದೆ.

**ಸಂಜೀವಿನಿ ಶೆಡ್**

ಗ್ರಾಮ ಪಂಚಾಯಿತಿಯಲ್ಲಿ ಒಳಪಡುವ ಗ್ರಾಮಗಳಲ್ಲಿರುವ ಸ್ವ ಸಹಾಯ ಸಂಘಗಳಿಗೆ ಪ್ರತ್ಯೇಕವಾದ ಶೆಡ್ ವ್ಯವಸ್ಥೆ ಮಾಡಿಕೊಡುವುದು ಇದಕ್ಕೆ ಸಂಜೀವಿನಿ ಶೆಡ್ ಎಂದು ಕರೆಯುತ್ತಾರೆ. ಇದರಲ್ಲಿ ಸಂಘಗಳು ತಮ್ಮ ಕಾರ್ಯಚಟುವಟಿಕೆಗಳಿಗೆ ಬಳಸಿಕೊಳ್ಳಬಹುದಾಗಿದೆ. ಚಾಮರಾಜನಗರ ಜಿಲ್ಲೆಯಲ್ಲಿ ನಿರ್ಮಾಣವಾಗಿರುವ ಏಕೈಕ ಸಂಜೀವಿನಿ ಶೆಡ್ ರೇಚಂಬಳ್ಳಿ ಗ್ರಾಮ, ಕಾಗಲವಾಡಿ ಗ್ರಾಮ ಪಂಚಾಯಿತಿಗೆ ಸೇರುತ್ತದೆ.

**ರಾಜೀವ್ ಗಾಂಧಿ ಸೇವಾ ಕೇಂದ್ರ**

ಗ್ರಾಮ ಪಂಚಾಯಿತಿಗಳ ಮಟ್ಟದಲ್ಲಿ ಸ್ಥಳೀಯರಿಗೆ ಸೇವಾ ಸವಲತ್ತುಗಳನ್ನು ಒದಗಿಸುವ ಸಲುವಾಗಿ ರಾಜೀವ್ ಗಾಂಧಿ ಸೇವಾ ಕೇಂದ್ರಗಳ ಕಟ್ಟಡಗಳನ್ನು ನಿರ್ಮಾಣ ಮಾಡಿ ಬಾಪೂಜಿ ಸೇವಾ ಯೋಜನೆಗಳಲ್ಲಿ ಒಂದೇ ಸೂರಿನಡಿಯಲ್ಲಿ 100 ಸೇವೆಗಳ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಿ ಸ್ಥಳೀಯ ಜನರಿಗೆ ಉತ್ತಮವಾದ ಸೇವೆಗಳನ್ನು ಸಲ್ಲಿಸುತ್ತಿವೆ.

**ಸಂತೆ ಕಟ್ಟಡ**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಮಾರುಕಟ್ಟೆಗಳ ಸಮಸ್ಯೆ ಇರುವುದರಿಂದ ಸಂತೆ ಕಟ್ಟಡಗಳ ನಿರ್ಮಾಣಕ್ಕೆ ಸಮುದಾಯ ಕಾಮಗಾರಿಗಳಲ್ಲಿ ಕಟ್ಟಿಸಲಾಗುತ್ತದೆ. ಈ ಕಟ್ಟಡ ನಿರ್ಮಾಣಕ್ಕೆ ನೀಡುವ ಅಂದಾಜು ಮೊತ್ತ 12,88,000 ರೂಗಳನ್ನು ನೀಡಲಾಗುತ್ತದೆ.

**ಕಾಂಕ್ರೀಟ್ ರಸ್ತೆಗಳು (ಸಿ.ಸಿ.ರಸ್ತೆಗಳು)**

ನರೇಗಾ ಯೋಜನೆಯಲ್ಲಿ ಪ್ರತಿಯೊಂದು ಗ್ರಾಮಗಳಿಗೆ ಕಾಂಕ್ರೀಟ್ ರಸ್ತೆಗಳನ್ನು ನಿರ್ಮಾಣ ಮಾಡಲು ಅನುದಾನವನ್ನು ನೀಡಲಾಗುತ್ತದೆ. ಸಮುದಾಯ ಆಧಾರಿತ ಕಾಮಗಾರಿಗಳಲ್ಲಿ ಮುಖ್ಯವಾಗಿ ಸಿ.ಸಿ. ರಸ್ತೆಗಳ ನಿರ್ಮಾಣ ಈ ಕಾಮಗಾರಿಗೆ ನೀಡುವ ಅಂದಾಜು ಮೊತ್ತ 6,50,000 ರೂಗಳ ಈ ಅನುದಾನವು 150 ಮೀಟರ್ ರಸ್ತೆ ಅಭಿವೃದ್ಧಿ ನೀಡಲಾಗುತ್ತದೆ.

**ಮೆಟ್ಲಿಂಗ್ ರಸ್ತೆಗಳು**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಪ್ರಮುಖವಾಗಿ ಗ್ರಾಮೀಣ ರಸ್ತೆಗಳ ಅಭಿವೃದ್ಧಿಗಾಗಿ ಮಟ್ಲಿಂಗ್‌ರಸ್ತೆಗಳನ್ನು ನಿರ್ಮಾಣ ಮಾಡುತ್ತಿವೆ. ಮೆಟ್ಲಿಂಗ್ ರಸ್ತೆ ಎಂದರೆ ಜಲ್ಲಿ ಮತ್ತು ಜೇಡಿ ಮಣ್ಣು ಹಾಕಿ ರಸ್ತೆ ನಿರ್ಮಿಸುವುದಾಗಿದೆ. ಮೆಟ್ಲಿಂಗ್ ರಸ್ತೆಗಳಿಗೆ 150ಮೀಟರ್ ಉದ್ದ ರಸ್ತೆ ಅಭಿವೃದ್ಧಿಗೆ ನೀಡಲಾಗುವ ಅನುದಾನದ ಮೊತ್ತ 10,000 ರೂಗಳು.

**ಚರಂಡಿ ನಿರ್ಮಾಣ**

ನರೇಗಾ ಯೋಜನೆಯಡಿ ಸಮುದಾಯ ಆಧಾರಿತ ಕಾಮಗಾರಿಗಳಲ್ಲಿ ಚರಂಡಿ ನಿರ್ಮಾಣವು

ಪ್ರಮುಖವಾದುದಾಗಿದೆ. ಈ ಹಂತದಲ್ಲಿ ಪ್ರತಿ 100 ಮೀಟರ್ ಉದ್ದದ ಚರಂಡಿ ನಿರ್ಮಾಣಕ್ಕೆ 3,00,000 ರೂಗಳು ಅನುದಾನವನ್ನು ನೀಡಲಾಗುತ್ತದೆ. ಗ್ರಾಮೀಣ ನೈರ್ಮಲ್ಯ ಮತ್ತು ಆರೋಗ್ಯದ ದೃಷ್ಟಿಯಿಂದ ಒಂದು ಉತ್ತಮ ಕಾಮಗಾರಿಯಾಗಿದೆ.

**ಕೊಳವೆ ಬಾವಿಯ ಮರು ಪೂರಣ ಘಟಕ**

ಉದ್ಯೋಗ ಖಾತ್ರಿ ಯೋಜನೆಯಲ್ಲಿ ಕೊಳವೆ ಬಾವಿಯ ಮರು ಪೂರ್ಣ ಘಟಕ ಎಂದು ಮಳೆಯ ನೀರು ಗುಂಡಿಯಲ್ಲಿ ಹಿಂಗುವುದರ ಮೂಲಕ ಅಂತರ್ಜಲವನ್ನು ವೃದ್ಧಿಸುವುದಾಗಿದೆ. ಈ ಯೋಜನೆಗೆ ಸಮುದಾಯಗಳ ಮೂಲಕ ಕೆಲಸಗಳನ್ನು ಮಾಡಿಸಲಾಗುತ್ತದೆ. ನರೇಗಾ ಯೋಜನೆಯಿಂದ ನೀಡುವಂತಹ ಅನುದಾನದ ಮೊತ್ತ 68,000 ರೂಗಳು ಇದರಿಂದ ಭವಿಷ್ಯದಲ್ಲಿ ಉಂಟಾಗಬಹುದಾದ ನೀರಿನ ಸಮಸ್ಯೆಯನ್ನು ನಿವಾರಿಸುವುದಾಗಿದೆ.

ಮೇಲೆ ಸೂಚಿಸಿರುವ ಕಾಮಗಾರಿಗಳಲ್ಲದೆ, ಮಹಿಳಾ ಸ್ವ–ಸಹಾಯ ಸಂಘಗಳು ಆರ್ಥಿಕ ಚಟುವಟಿಕೆಗೆ ಅಣಬೆ ಶೆಡ್ ನಿರ್ಮಾಣ, ಚಿತಾಗಾರ ನಿರ್ಮಾಣ, ಕಲ್ಯಾಣಿ ಪುನಶ್ಚೇತನ, ಕಣ ನಿರ್ಮಾಣ, ನಾಲಾ ಅಭಿವೃದ್ಧಿ ಇನ್ನೂ ಸಾಕಷ್ಟು ಕಾಮಗಾರಿಗಳನ್ನು ಈ ನರೇಗಾ ಯೋಜನೆಯಲ್ಲಿ ಕೈಗೊಳ್ಳಬಹುದಾಗಿದೆ.

**ಪರಾಮರ್ಶನ/ಆಕರ ಗ್ರಂಥಗಳು**


- ಚಂದ್ರಶೇಖರ್, ಕೆ. *ಅಭಿವೃದ್ಧಿ ಪಥದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು.* ದೀಪ ಪಬ್ಲಿಕೇಷನ್ಸ್.
- ನಾರಾಯಣ ಸ್ವಾಮಿ, ಕೆ.ಎಸ್. (1979). *ಲೋಕನೀತಿ ಸರ್ವೋದಯ ಮತ್ತು ಕೆ.ಶ್ರೀನಿವಾಸ ರಾವ್ ರಾಜ್ಯಶಾಸ್ತ್ರ.* ಸಂಬೋಧ ಮುದ್ರಣಾಲಯ.
- ಒಡೆಯರ್ ಡಿ. ಹೆಗ್ಗಡೆ. (2007). *ಭಾರತೀಯ ಆರ್ಥಿಕ ಚಿಂತಕರು.* ಲಕ್ಷ್ಮೀ ಪ್ರಿಂಟಿಂಗ್ ಹೌಸ್.
- ತಳವಾರ, ಎನ್.ಎಂ. (2013). *ಕನ್ನಡ ವಿಶ್ವಕೋಶ.* (ಪರಿಷ್ಕೃತ ವಿಸ್ತೃತ ಆವೃತ್ತಿ). ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ. ಸಂ.6.
- Basu, A. K. (2013). Impact of rural employment guarantee schemes on seasonal labor markets: optimum compensation and workers' welfare. *The Journal of Economic Inequality*, 11(1), 1-34.
- Kamath, R. (2010). National rural employment guarantee act: An effective safety net?. *IIMB Management Review*, 22(1), 42-55.
- Maiorano, D. (2014). The politics of the Mahatma Gandhi National Rural Employment Guarantee Act in Andhra Pradesh. *World Development, 58*, 95–105. https://doi.org/10.1016/j.worlddev.2014.01.006
- Reddy, D. K., Reddy, A. a. A., & Bantilan, M. C. S. (2014). The impact of Mahatma Gandhi National Rural Employment Guarantee Act (MGNREGA) on rural labor markets and agriculture. *India Review*, *13*(3), 251–273. https://doi.org/10.1080/14736489.2014.937271